# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜನವರಿ ೭, ೨೦೧೬ (ಪುಷ್ಯ ೧೭, ಶಕ ವರ್ಷ ೧೯೩೭)<br>Bengaluru, Thursday, January 7, 2016 (Pushya 17, Shaka Varsha 1937) | ಸಂಚಿಕೆ ೧<br>Issue 1 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರ ಕಛೇರಿ ನಡಾವಳಿ

**ಉಪಸ್ಥಿತರು : ಹೆಚ್.ಜಿ. ತೆಂಬದ್**
**ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ**
**ದಾವಣಗೆರೆ**

**ವಿಷಯ :** ವಾಹನ ಸಂಖ್ಯೆ : KA-15/A-6996 (S/C)ರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ದಿನಾಂಕ : 31–01–2014 ರಿಂದ ಅಧ್ಯರ್ಪಣೆ ಮಾಡಿರುತ್ತಾರೆ.
2. ಮಾಲೀಕರ ಅರ್ಜಿ ದಿನಾಂಕ : 04–11–2015.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ : 04–11–2015.

**ಪ್ರಸ್ತಾವನೆ :**

ವಾಹನ ಸಂಖ್ಯೆ : KA-15/A-6996 (S/C)ರ ಮಾಲೀಕರಾದ ಶ್ರೀ ಜೆ. ಉಮೇಶ್ ಬಿನ್ ಜೆ. ನಾಗರಾಜಪ್ಪ, ನ್ಯಾಮತಿ, ಹೊನ್ನಾಳಿ(ತಾ), ದಾವಣಗೆರೆ(ಜಿ), ಮೇಲ್ಕಂಡ ವಾಹನವು ದುಸ್ಥಿತಿಯಲ್ಲಿರುವುದಾಗಿ ತಿಳಿಸಿ ಸದರಿ ವಾಹನದ ನೋಂದಣಿ ರದ್ದತಿಗೆ ದಿನಾಂಕ : 04–11–2015ರಂದು ಮನವಿ ಮಾಡಿರುತ್ತಾರೆ. ವಾಹನವು 1999ರ ಮಾದರಿಯಾಗಿದ್ದು ರಸ್ತೆಯಲ್ಲಿ ಓಡಿಸಲು ಯೋಗ್ಯವಾಗಿರುವುದಿಲ್ಲವೆಂದು ತಿಳಿಸಿರುವುದರ ಮೂಲಕ ಮೇಲ್ಕಂಡ ವಾಹನದ ನೋಂದಣಿಯನ್ನು ರದ್ದುಪಡಿಸಬಹುದಾಗಿ ಮೋಟಾರು ವಾಹನ ನಿರೀಕ್ಷಕರು ದಿನಾಂಕ : 04–11–2015ರ ಉಲ್ಲೇಖ (3)ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಆದ್ದದರಿಂದ, ವಾಹನ ಸಂಖ್ಯೆ : KA-15/A-6996 (S/C)ರ ನೋಂದಣಿಯನ್ನು ರದ್ದು ಪಡಿಸಲು ಆದೇಶಿಸಿದೆ.

**ಆದೇಶ**

**ಸಂ:ಪ್ರಾಸಾ.ಅ.ನೋ.ವಿ–01/2015–16 KA-15/A-6996 (S/C), ದಿನಾಂಕ : 17–11–2015**

ಹೆಚ್.ಜಿ. ತೆಂಬದ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ, ಆದ ನಾನು ನನಗೆ 1988ರ ಕೇಂದ್ರ ಮೋಟಾರು ವಾಹನ ಕಾಯ್ದೆ 55(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಕಾರಣಗಳಿಂದಾಗಿ ಮೋ/ವಾ.ಸಂ : KA-15/A-6996 (S/C)ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಹಾಗೂ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲಿಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಪಡಿಸುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | KA-15/A-6996 (S/C) |
| 2. | ವಾಹನದ ನೋಂದಣಿ ದಿನಾಂಕ | 11–02–1999 |
| 3. | ವಾಹನದ ತಯಾರಕನ ಹೆಸರು | Ashok Leyland |
| 4. | ವಾಹನದ ವರ್ಗ | HPV |
| 5. | ವಾಹನ ತಯಾರಿಕೆ ವರ್ಷ | 01/1999 |
| 6. | ಚಾಸಿಸ್ ಸಂಖ್ಯೆ | LSE417536 |

| | | |
|---|---|---|
| 7. | ಯಂತ್ರ ಸಂಖ್ಯೆ | LSH114138 |
| 8. | ತೆರಿಗೆ ಅವಧಿ | 31-01-2014 |
| 9. | ಮಾಲೀಕರ ಹೆಸರು ಮತ್ತು ವಿಳಾಸ | ಜೆ. ಉಮೇಶ್ ಬಿನ್ ಜೆ. ನಾಗರಾಜಪ್ಪ, ನ್ಯಾಮತಿ, ಹೊನ್ನಾಳಿ(ತಾ), ದಾವಣಗೆರೆ(ಜಿ). |

P.R. 1088

**ಹೆಚ್.ಜೆ. ತೆಂಬದ್,**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ,
ದಾವಣಗೆರೆ.

## ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರ ಕಛೇರಿ ನಡಾವಳಿ

**ಉಪಸ್ಥಿತರು : ಹೆಚ್.ಜೆ. ತೆಂಬದ್**
**ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ**
**ದಾವಣಗೆರೆ**

**ವಿಷಯ :** ವಾಹನ ಸಂಖ್ಯೆ : KA-19/7504 (HGV)ರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಮಾಲೀಕರ ಅರ್ಜಿ ದಿನಾಂಕ : 17–11–2015.
2. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ : 19–11–2015.

**ಪ್ರಸ್ತಾವನೆ :**

ವಾಹನ ಸಂಖ್ಯೆ : KA-19/7504 (HGV)ರ ಮಾಲೀಕರಾದ ಶ್ರೀ ಸಿಖಂದರ್ ಬಿನ್ ಮೊಹಬೂಬ ಸಾಬ, ಬಾಷಾನಗರ ಮೇನ್ ರಸ್ತೆ, ಶಿವಾಜಿನಗರ, ದಾವಣಗೆರೆ, ಮೇಲ್ಕಂಡ ವಾಹನವು ದುಸ್ಥಿತಿಯಲ್ಲಿರುವುದಾಗಿ ತಿಳಿಸಿ ಸದರಿ ವಾಹನದ ನೋಂದಣಿ ರದ್ದತಿಗೆ ದಿನಾಂಕ : 30–10–2015ರಂದು ಮನವಿ ಮಾಡಿರುತ್ತಾರೆ. ವಾಹನವು 1996ರ ಮಾದರಿಯಾಗಿದ್ದು ರಸ್ತೆಯಲ್ಲಿ ಓಡಿಸಲು ಯೋಗ್ಯವಾಗಿರುವುದಿಲ್ಲವೆಂದು ತಿಳಿಸಿರುವುದರ ಮೂಲಕ ಮೇಲ್ಕಂಡ ವಾಹನದ ನೋಂದಣಿಯನ್ನು ರದ್ದುಪಡಿಸಬಹುದಾಗಿ ಮೋಟಾರು ವಾಹನ ನಿರೀಕ್ಷಕರು ದಿನಾಂಕ : 07–11–2015ರ ಉಲ್ಲೇಖ (2)ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಆದ್ದುದರಿಂದ, ವಾಹನ ಸಂಖ್ಯೆ : KA-19/7504 (HGV)ರ ನೋಂದಣಿಯನ್ನು ರದ್ದು ಪಡಿಸಲು ಆದೇಶಿಸಿದೆ.

### ಆದೇಶ

**ಸಂ:ಪ್ರಾಸಾ.ಅ.ನೋ.ವಿ–01/2015–16 KA-19/7504 (HGV)ರ ದಿನಾಂಕ : 19–11–2015**

ಹೆಚ್.ಜೆ. ತೆಂಬದ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ, ಆದ ನಾನು ನನಗೆ 1988ರ ಕೇಂದ್ರ ಮೋಟಾರು ವಾಹನ ಕಾಯ್ದೆ 55(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಕಾರಣಗಳಿಂದಾಗಿ ಮೋ/ವಾ.ಸಂ : KA-19/7504 (HGV)ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಹಾಗೂ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲಿಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಪಡಿಸುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | KA-19/7504 (HGV) |
| 2. | ವಾಹನದ ನೋಂದಣಿ ದಿನಾಂಕ | 05–01–1995 |
| 3. | ವಾಹನದ ತಯಾರಕನ ಹೆಸರು | Ashok Leyland |
| 4. | ವಾಹನದ ವರ್ಗ | HGV |
| 5. | ವಾಹನ ತಯಾರಿಕೆ ವರ್ಷ | 1995 |
| 6. | ಚಾಸಿಸ್ ಸಂಖ್ಯೆ | RYE356391 |
| 7. | ಯಂತ್ರ ಸಂಖ್ಯೆ | RYE240683 |
| 8. | ತೆರಿಗೆ ಅವಧಿ | HGV |
| 9. | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಸಿಖಂದರ್ ಬಿನ್ ಮೊಹಬೂಬ ಸಾಬ, ಬಾಷಾನಗರ ಮೇನ್ ರಸ್ತೆ, ಶಿವಾಜಿನಗರ, ದಾವಣಗೆರೆ. |

P.R. 1089

**ಹೆಚ್.ಜೆ. ತೆಂಬದ್,**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ,
ದಾವಣಗೆರೆ.

## ಔಷಧ ನಿಯಂತ್ರಣ ಇಲಾಖೆ

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.**

### ಜ್ಞಾಪನ

**ಸಂಖ್ಯೆ : ಔನಿಇ/498/ಸಿಬ್ಬಂದಿ/2015–16, ಬೆಂಗಳೂರು, ದಿನಾಂಕ : 28–10–2015.**

**ವಿಷಯ :** ಶ್ರೀ ಶಂಕರ ಜ್ಯೋತಿ, ಉಪ ಔಷಧ ನಿಯಂತ್ರಕರು (ಸ್ವಪ್ರ), ಪ್ರಾದೇಶಿಕ ಕಛೇರಿ, ದಾವಣಗೆರೆ ಇವರಿಗೆ ಗಳಿಕೆ ರಜೆಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ :** ಶ್ರೀ ಶಂಕರ ಜ್ಯೋತಿ, ಉಪ ಔಷಧ ನಿಯಂತ್ರಕರು (ಸ್ವಪ್ರ), ಇವರ ಮನವಿ ಪತ್ರ ದಿನಾಂಕ : 28–10–2015.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದ ಉಲ್ಲೇಖಿತ ಮನವಿಯ ಮೇರೆಗೆ, ಶ್ರೀ ಶಂಕರ ಜ್ಯೋತಿ, ಉಪ ಔಷಧ ನಿಯಂತ್ರಕರು (ಸ್ವಪ್ರ), ಪ್ರಾದೇಶಿಕ ಕಛೇರಿ, ದಾವಣಗೆರೆ ಇವರಿಗೆ ಮಹಾಲೇಖಪಾಲರ ರಜೆ ಲಭ್ಯತೆ ನಿರೀಕ್ಷೆಯ ಮೇರೆಗೆ, ದಿನಾಂಕ : 29–10–2015 ರಿಂದ 26–01–2016ರವರೆಗೆ (ಎರಡು ದಿನಗಳೂ ಸೇರಿದಂತೆ) ಒಟ್ಟು 90 ದಿನಗಳ ಗಳಿಕೆ ರಜೆಯನ್ನು ಉಪಯೋಗಿಸಿಕೊಂಡು ರಜೆಯಲ್ಲಿ ತೆರಳಲು ಅನುಮತಿಸಿದೆ.

ಸದರಿ ಅಧಿಕಾರಿಯವರು ರಜೆಯ ಮೇಲೆ ತೆರಳುವ ಮುನ್ನ ಅವರು ಹೊಂದಿರುವ ಉಪ ಔಷಧ ನಿಯಂತ್ರಕರ ಹುದ್ದೆಯ ಪ್ರಭಾರವನ್ನು ಶ್ರೀ ಸಿ. ಕುಮಾರ್, ಸಹಾಯಕ ಔಷಧ ನಿಯಂತ್ರಕರು–1, ದಾವಣಗೆರೆ ಪ್ರಾದೇಶಿಕ ಕಛೇರಿ ಇವರಿಗೆ ವಹಿಸಿಕೊಡಲು ಈ ಮೂಲಕ ಆದೇಶಿಸಿದೆ.

ಶ್ರೀ ಸಿ. ಕುಮಾರ್, ಸಹಾಯಕ ಔಷಧ ನಿಯಂತ್ರಕರು–1, ದಾವಣಗೆರೆ ವೃತ್ತ ಇವರು ಶ್ರೀ ಶಂಕರ ಜ್ಯೋತಿ ಇವರಿಂದ ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ದಾವಣಗೆರೆ ಹುದ್ದೆಯ ಪ್ರಭಾರವನ್ನು ಪಡೆದು, ಅವರ ರಜೆ ಅವಧಿ ಪೂರೈಸುವವರೆಗೆ ತಮ್ಮ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸಲು ಈ ಮೂಲಕ ನಿರ್ದೇಶಿಸಿದೆ.

**PR. 1091**
**SC.25**

**ಔಷಧ ನಿಯಂತ್ರಕರು**

## ಔಷಧ ನಿಯಂತ್ರಣ ಇಲಾಖೆ
### ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.

### ಜ್ಞಾಪನ

**ಸಂಖ್ಯೆ : ಔನಿಇ/491/ಸಿಬ್ಬಂದಿ/2015–16, ಬೆಂಗಳೂರು, ದಿನಾಂಕ : 04–11–2015.**

**ವಿಷಯ :** ಶ್ರೀ ವೀರಭದ್ರೇಗೌಡ ಇವರು ದೈವಾಧೀನರಾದ ಹಿನ್ನೆಲೆಯಲ್ಲಿ, ಸಹಾಯಕ ಔಷಧ ನಿಯಂತ್ರಕರು, ಮೈಸೂರು ವೃತ್ತ–2, ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು ನಿರ್ವಹಿಸುವ ಬಗ್ಗೆ.

**ಉಲ್ಲೇಖ :** ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಮೈಸೂರು ಇವರ ಪತ್ರ ಸಂಖ್ಯೆ : ಔನಿಇ/ಉಔನಿಮೈ/ಸಿಬ್ಬಂದಿ/292/2015–16, ದಿನಾಂಕ : 15–10–2015.

ಉಲ್ಲೇಖಿತ ಪತ್ರದಲ್ಲಿ ವಿವರಿಸಲಾದ ಸಂದರ್ಭಗಳ ಮೇರೆಗೆ, ದಿನಾಂಕ : 13–10–2015ರಂದು ಶ್ರೀ ವೀರಭದ್ರೇಗೌಡ ರವರು ದೈವಾಧೀನರಾಗಿರುವ ಹಿನ್ನೆಲೆಯಲ್ಲಿ, ಸದರಿಯವರು ನಿರ್ವಹಿಸುತ್ತಿದ್ದ ಮೈಸೂರು ವೃತ್ತ–2ರ ಸಹಾಯಕ ಔಷಧ ನಿಯಂತ್ರಕರ ಹುದ್ದೆಯು ತೆರವಾಗಿರುತ್ತದೆ.

ಆಡಳಿತಾತ್ಮಕ ದೃಷ್ಟಿಯಿಂದ ಮೈಸೂರು ವೃತ್ತ–2ರ ಸಹಾಯಕ ಔಷಧ ನಿಯಂತ್ರಕರ ಹುದ್ದೆಯ ಪ್ರಭಾರವನ್ನು ತಕ್ಷಣವೇ ವಹಿಸಿಕೊಂಡು (to assume charge) ತಮ್ಮ ಹಾಲಿ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸಲು ಶ್ರೀಮತಿ ಮಂಜುಳ ಸಿ. ಸಹಾಯಕ ಔಷಧ ನಿಯಂತ್ರಕರು, ರಾಜ್ಯ ಗುಪ್ತ ವಾರ್ತೆ ಶಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಈ ಮೂಲಕ ಆದೇಶಿಸಿದೆ.

**PR. 1092**
**SC.25**

**ಔಷಧ ನಿಯಂತ್ರಕರು**

## ಔಷಧ ನಿಯಂತ್ರಣ ಇಲಾಖೆ
### ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.

### ಜ್ಞಾಪನ

**ಕಛೇರಿ ಆದೇಶ ಸಂಖ್ಯೆ : ಔನಿಇ/498/ಸಿಬ್ಬಂದಿ/2015–16, ಬೆಂಗಳೂರು, ದಿನಾಂಕ : 09–11–2015.**

**ವಿಷಯ :** ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ದಾವಣಗೆರೆ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುವ ಬಗ್ಗೆ.

**ಉಲ್ಲೇಖ :** ಈ ಕಛೇರಿ ಜ್ಞಾಪನ ಸಂಖ್ಯೆ : ಔನಿಇ/498/ಸಿಬ್ಬಂದಿ/2015–16, ದಿನಾಂಕ : 28–10–2015.

ಶ್ರೀ ಸಿ. ಕುಮಾರ್, ಸಹಾಯಕ ಔಷಧ ನಿಯಂತ್ರಕರು–1, ದಾವಣಗೆರೆ ವೃತ್ತ ರವರಿಗೆ ಉಲ್ಲೇಖಿತ ಈ ಕಛೇರಿ ಜ್ಞಾಪನದನ್ವಯ ನಿರ್ವಹಿಸಲು ಸೂಚಿಸಲಾಗಿದ್ದ ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ದಾವಣಗೆರೆ ಹುದ್ದೆಯ ಪ್ರಭಾರ ವ್ಯವಸ್ಥೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಶ್ರೀ ದೀಪಕ್ ಎನ್. ಗಾಯಕ್‌ವಾಡ್, ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಬೆಳಗಾವಿ ರವರು ತಕ್ಷಣದಿಂದ ಜಾರಿಗೆ ಬರುವಂತೆ, ಶ್ರೀ ಸಿ. ಕುಮಾರ್‌ರವರಿಂದ ದಾವಣಗೆರೆ ಪ್ರಾದೇಶಿಕ ಕಛೇರಿಯ ಉಪ ಔಷಧ ನಿಯಂತ್ರಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು, ಮುಂದಿನ ಆದೇಶದವರೆಗೆ ತಮ್ಮ ಹಾಲಿ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸುವಂತೆ ಆದೇಶಿಸಿದೆ.

**PR. 1093**
**SC.25**

**ಔಷಧ ನಿಯಂತ್ರಕರು**

## ಔಷಧ ನಿಯಂತ್ರಣ ಇಲಾಖೆ
**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು-560 001.**

**ಕಛೇರಿ ಆದೇಶ ಸಂಖ್ಯೆ : ಔನಿಇ/583/ಸಿಬ್ಬಂದಿ/2015-16, ಬೆಂಗಳೂರು, ದಿನಾಂಕ : 30-11-2015.**

**ವಿಷಯ :** ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಮೈಸೂರು ಹಾಗೂ ಬಳ್ಳಾರಿ ಹುದ್ದೆಗಳನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುವ ಬಗ್ಗೆ.

**ಉಲ್ಲೇಖ :** 1. ಕಛೇರಿ ಆದೇಶ ಸಂಖ್ಯೆ : ಔನಿಇ/222/ಸಿಬ್ಬಂದಿ/2015-16, ದಿನಾಂಕ : 07-07-2015.
2. ಕಛೇರಿ ಆದೇಶ ಸಂಖ್ಯೆ : ಔನಿಇ/556/ಸಿಬ್ಬಂದಿ/2015-16, ದಿನಾಂಕ : 19-11-2015.

ಶ್ರೀ ಬಿ.ಪಿ. ಅರುಣ್, ಉಪ ಔಷಧ ನಿಯಂತ್ರಕರು-1, ಪ್ರಾದೇಶಿಕ ಕಛೇರಿ, ಬೆಂಗಳೂರು ರವರಿಗೆ ಉಲ್ಲೇಖ (1)ರ ಈ ಕಛೇರಿ ಆದೇಶದನ್ವಯ ನಿರ್ವಹಿಸಲು ಸೂಚಿಸಲಾಗಿದ್ದ ಉಪ ಔಷದ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಮೈಸೂರು ಹುದ್ದೆಯ ಪ್ರಭಾರ ವ್ಯವಸ್ಥೆಯನ್ನು ಹಾಗೂ ಉಲ್ಲೇಖ (2)ರ ಆದೇಶದನ್ವಯ ಶ್ರೀ ಕೃಷ್ಣಾರೆಡ್ಡಿ, ಸಹಾಯಕ ಔಷಧ ನಿಯಂತ್ರಕರು-1, ಬಳ್ಳಾರಿ ವೃತ್ತ ಇವರಿಗೆ ನಿರ್ವಹಿಸಲು ಸೂಚಿಸಲಾಗಿದ್ದ ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಬಳ್ಳಾರಿ ಹುದ್ದೆಯ ಪ್ರಭಾರ ವ್ಯವಸ್ಥೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಶ್ರೀಮತಿ ಗೀತಾಕುಮಾರಿ ದಾಸ್, ಸಹಾಯಕ ಔಷಧ ನಿಯಂತ್ರಕರು, ಕೊಡಗು ವೃತ್ತ, ಮಡಿಕೇರಿ ರವರು ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಮೈಸೂರು ಹುದ್ದೆಯ ಪ್ರಭಾರವನ್ನು ಶ್ರೀ ಬಿ.ಪಿ. ಅರುಣ್‌ರವರಿಂದ ವಹಿಸಿಕೊಂಡು, ಮುಂದಿನ ಆದೇಶದವರೆಗೆ ತಮ್ಮ ಹಾಲಿ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸುವಂತೆ ಆದೇಶಿಸಿದೆ.

ಮುಂದುವರೆದಂತೆ, ಶ್ರೀ ಬಿ.ಪಿ. ಅರುಣ್, ಉಪ ಔಷಧ ನಿಯಂತ್ರಕರು-1, ಪ್ರಾದೇಶಿಕ ಕಛೇರಿ, ಬೆಂಗಳೂರು ರವರು ತಕ್ಷಣದಿಂದ ಜಾರಿಗೆ ಬರುವಂತೆ ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಬಳ್ಳಾರಿ ಹುದ್ದೆಯ ಪ್ರಭಾರವನ್ನು ಶ್ರೀ ಎನ್. ಕೃಷ್ಣಾರೆಡ್ಡಿ ರವರಿಂದ ವಹಿಸಿಕೊಂಡು, ಮುಂದಿನ ಆದೇಶದವರೆಗೆ ತಮ್ಮ ಹಾಲಿ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸುವಂತೆ ಆದೇಶಿಸಿದೆ.

**PR. 1094**
**SC.25**

**ಔಷಧ ನಿಯಂತ್ರಕರು**

## ಔಷಧ ನಿಯಂತ್ರಣ ಇಲಾಖೆ
**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು-560 001.**

**ಕಛೇರಿ ಆದೇಶ ಸಂಖ್ಯೆ : ಔನಿಇ/556/ಸಿಬ್ಬಂದಿ/2015-16, ಬೆಂಗಳೂರು, ದಿನಾಂಕ : 19-11-2015.**

**ವಿಷಯ :** ಇಲಾಖೆಯ ಗ್ರೂಪ್-ಎ ಅಧಿಕಾರಿಗಳಾದ ಉಪ ಔಷಧ ನಿಯಂತ್ರಕರ ವರ್ಗಾವಣೆಯ ಮೇರೆಗೆ ಸ್ಥಳನಿಯುಕ್ತಿ ಕುರಿತು.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 09 ಐಎಂಎಂ 2015, ದಿನಾಂಕ : 18-11-2015.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದ ಉಲ್ಲೇಖದಲ್ಲಿನ ಸರ್ಕಾರದ ಅಧಿಸೂಚನೆಯ ಮೇರೆಗೆ, ಈ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಉಪ ಔಷಧ ನಿಯಂತ್ರಕರುಗಳನ್ನು ವರ್ಗಾವಣೆ ಮಾಡಿ, ಆದೇಶ ಹೊರಡಿಸಿದೆ. ಈ ಕೆಳಕಂಡ ಅಧಿಕಾರಿಗಳು ಪ್ರಭಾರವನ್ನು ವಹಿಸಿಕೊಳ್ಳಲು ಮತ್ತು ವಹಿಸಿಕೊಡಲು ಆದೇಶಿಸಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಹಾಗೂ ಕಾರ್ಯ ನಿರ್ವಹಣಾ ಸ್ಥಳ ಶ್ರೀ/ಶ್ರೀಮತಿ | ವರ್ಗಾವಣೆ ಮೇರೆಗೆ ಸ್ಥಳನಿಯುಕ್ತಿಗೊಂಡ ಕಛೇರಿ ಹಾಗೂ ಪದನಾಮ | ಪ್ರಭಾರ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಬಗ್ಗೆ |
|---|---|---|---|
| 1 | 2 | 3 | 4 |
| 1 | ಎಸ್. ಉಮೇಶ್, ಉಪ ಔಷಧ ನಿಯಂತ್ರಕರು-3, ಪ್ರಾದೇಶಿಕ ಕಛೇರಿ, ಬೆಂಗಳೂರು | ಸದಸ್ಯ ಕಾರ್ಯದರ್ಶಿ, ಪರೀಕ್ಷಾ ಪ್ರಾಧಿಕಾರ ಮಂಡಳಿ, ಬೆಂಗಳೂರು | ಸದರಿ ಅಧಿಕಾರಿಯವರು ಅವರ ಹಾಲಿ ಹುದ್ದೆಯ ಪ್ರಭಾರವನ್ನು ಶ್ರೀ ಬಿ.ಪಿ. ಅರುಣ್, ಉಪ ಔಷಧ ನಿಯಂತ್ರಕರು-1, ಪ್ರಾದೇಶಿಕ ಕಛೇರಿ, ಬೆಂಗಳೂರು ಇವರಿಗೆ ವಹಿಸಿಕೊಟ್ಟು, ತದನಂತರ ಪರೀಕ್ಷಾ ಪ್ರಾಧಿಕಾರ ಮಂಡಳಿಯ ಸದಸ್ಯ ಕಾರ್ಯದರ್ಶಿ ಹುದ್ದೆಯಲ್ಲಿ ಮುಂದುವರೆಯುವುದು. |
| 2 | ಮಹಮ್ಮದ್ ಅಬ್ದುಲ್ ವಕೀಲ್ ಅನ್ಸಾರಿ, ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಬಳ್ಳಾರಿ. | ಉಪ ಔಷಧ ನಿಯಂತ್ರಕರು-3, ಪ್ರಾದೇಶಿಕ ಕಛೇರಿ, ಬೆಂಗಳೂರು. | ಸದರಿ ಅಧಿಕಾರಿಯವರು ಅವರ ಹಾಲಿ ಹುದ್ದೆಯ ಪ್ರಭಾರವನ್ನು ಶ್ರೀ ಎನ್. ಕೃಷ್ಣಾರೆಡ್ಡಿ, ಸಹಾಯಕ ಔಷಧ ನಿಯಂತ್ರಕರು-1, ಬಳ್ಳಾರಿ ವೃತ್ತ, ಇವರಿಗೆ ವಹಿಸಿಕೊಟ್ಟು, ತದನಂತರ ಶ್ರೀ ಬಿ.ಪಿ. ಅರುಣ್‌ರವರಿಂದ ಬೆಂಗಳೂರು ಪ್ರಾದೇಶಿಕ ಕಛೇರಿಯ ಉಪ ಔಷಧ ನಿಯಂತ್ರಕರು-3 ಹುದ್ದೆಯ ಪ್ರಭಾರವನ್ನು ವಹಿಸಿಕೊಳ್ಳುವುದು. |

ಶ್ರೀ ಎನ್. ಕೃಷ್ಣಾರೆಡ್ಡಿ ರವರು ಬಳ್ಳಾರಿ ಪ್ರಾದೇಶಿಕ ಕಛೇರಿಯ ಉಪ ಔಷಧ ನಿಯಂತ್ರಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಮ್ಮ ಹಾಲಿ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದಲ್ಲಿ ನಿರ್ವಹಿಸತಕ್ಕದ್ದು.

ಎಲ್ಲಾ ಅಧಿಕಾರಿಗಳು ತಮ್ಮ ಹುದ್ದೆಯ ಪ್ರಭಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಪ್ರಕ್ರಿಯೆಯನ್ನು ಮುಗಿಸತಕ್ಕದ್ದು ಹಾಗೂ ತಮ್ಮ ಬಳಿ ಇರುವ ಯಾವುದೇ ತನಿಖಾ ಕಡತಗಳನ್ನು ವಶಪಡಿಸಿಕೊಂಡ ದಾಖಲೆ, ಮುದ್ದೆಮಾಲ್ ಇತ್ಯಾದಿಗಳನ್ನು ಎಲ್ಲಾ ವಿವರಗಳೊಂದಿಗೆ ಹಸ್ತಾಂತರಿಸಿ, ವರದಿಯನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಆದೇಶಿಸಿದೆ.

**PR. - 1095**

**ಔಷಧ ನಿಯಂತ್ರಕರು**

**SC. – 50**

## Office of the Commissioner of Commercial Taxes (Karnataka), Vanijya Therige Karyalaya, Gandhi Nagar, Kalidasa Road, Bengaluru-560009.

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU-CLARIFICATION UNDER SECTION 59(4) OF THE KARNATAKA VALUE ADDED TAX ACT 2003,

Present: **Ritvik Pandey, I.A.S.**
Commissioner of Commercial Taxes.
(Karnataka) Bengaluru.

Sub: KVAT Act, 2003-Clarification under Section 59(4) of the Karnataka Value Added Tax Act, 2003 regarding the rate of tax applicable for' Wall Paper'- Reg.

Ref: Application filed by *M/s.* Next Step India, *17/1,* 2nd Cross, 5" Main, Nanjamba Agrahara, 5" Main Chamarajapet, Bengaluru-560096 (TIN: 29801236516) on 8th June 2015.

In the application cited above, *M/s.* Next Step India, *17/1,* 2nd Cross, 5th Main, Nanjamba Agrahara, 5th Main Chamarajapet, Bengaluru-560096 (TIN: 29801236516) has sought clarification regarding the rate of tax applicable for' Wall Paper'. The applicant understands that, above mentioned product falls under Serial No. 69 of the Ill Schedule to the Karnataka Value Added Tax Act, 2003 (herein afterwards called 'Act'), and is liable for Tax at 5.5%.

2. Section 59(4) of the Karnataka Value Added Tax Act 2003(herein afterwards called 'Act') empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintain uniformity in the work of assessments and collection revenue. It is examined and found that, the clarification requested by the applicant is within the scope of the aforesaid provision and it is necessary that, the clarification be issued for the purpose of maintaining uniformity in the work of assessments and collection of revenue.

3. The matter is examined and the correct position of law is analyzed as under:-

The applicant in his application has stated that, they are engaged in "Wall Paper" trade and they are importing Wall Paper from Korea and its HSN Code is 4811.20 and Wall Paper description is Paper with decorated layer of PVC Plastics and in general it is a PVC Coated paper used for walls and is not a photographic paper and hence applicable rate of tax is 5.5%.

4. The applicant has sought clarification with regard to WALL PAPER. The goods dealt in by the applicant is specifically used as wall papers. However, the entry 69 of III Schedule to the Act, starts with words 'Paper of all kinds' which are always related to Stationary goods and Packing goods which are made up of paper. This clearly shows that, the intention of the Legislature is to bring those class of goods which are used as stationary and packing goods which are made up of paper under the ambit of this classification. This classification is based on the usage of goods which are made up of paper. If the Legislature intended to bring these goods, it would have carved the entry called "wall paper'. Therefore, 'Wall Paper 'cannot be brought under the ambit of 'Paper of All Kinds' since all kinds of paper including those appearing in the entry are used as stationary and packing goods. *Exclusion of goods like 'Photographic Paper' clearly shows that, if those goods made up of paper which are not in the nature of Stationary and packing materials are kept outside the purview.* To get into the list, they shall be in the nature of stationary and packing materials and those goods even though made up of paper which are not in the nature of stationary and packing materials cannot brought under the ambit of 'Paper of all kinds'. The word "including" draws into its ambit only those kinds of goods which are in the nature of stationary or packing and not otherwise and the word used 'Excluding" excludes those goods which are not in the nature of stationary or packing. 'PVC coated Paper' which is appearing in the entry is in the nature of "STATIONARY" and also "PACKING MATERIALS "as these goods are used for binding of books so as to stop the mutilation of text books and also used to pack books or paper and then tied with twine or gum tape and also as outer covers of dairies, notebooks, Novels, Text books and the like.

5. The India Standard Glossary of Terms used in Paper Trade and Industry(IS4661:1999) published by Bureau of Indian Standards, Manak Bhavan, 9, Bahadur Shah Zafar Marg, New Delhi-110002 gives the meaning of wall paper as follow:

> **Wallpaper**: A hanging paper or tile stock which has been suitable printed or decorated for wall coverings. The paper is usually given a ground coat of clay or of casein-and clay, which may contain pigments to form a part of the final design, and then it is printed with oil inks, casein inks, or paints to complete the design. The paper may also be embossed or plastic coated.

The above description clearly points to the fact that, wall paper is decorative material not a stationary article or packing material. These wall papers are used extensively in interior decoration industry not as stationary or packing materials. 'Wall Paper' is classified under entry 4814.20.00 under Central Excise Tariff Act 1985 exclusively while other goods made up of paper are classified under different entries. Thus, the classification of commodities based on the commercial parlance shall be the criteria to determine applicability of rate of tax.

6. The Hon'ble Supreme Court of India in the case of **State Of Uttar Pradesh VS. M/S. Kores (India) Ltd on 18 October, (1976)1977 AIR 132, 1977 SCR (1) 837** had an occasion to analyze the word 'Paper" wherein it is held that the word **'paper' forms part of the denomination of a specialized article is not decisive of the question whether the article is paper as generally understood.** In the applicant's case also "WALL PAPER" is under in commercial parlance as the commodity to decorate wall not as "PVC Coated Paper" which is in commercial parlance is understood as the commodity used for binding of books and wrapping purposes and not for decoration of walls. If all these tests applied to "W ALL PAPER", then it fails but "PVC Coated paper" passes the test. Thus, the "WALL PAPER" cannot be classified into the ambit of "PVC Coated paper"

In the same case, the Hon'ble Supreme Court of India has held as follow:

> A word which is not defined in an enactment has to be understood in its popular and commercial sense with reference to the context in which it occurs. It has to be understood according to the well-established canon of construction **in the sense in which persons dealing in and using the article understand it.**

In commercial parlance and popular parlance 'Wall Paper' is understood as goods used for decoration of walls as interior decoration material and not as stationary or packing materials. Therefore, the Wall Paper cannot brought under entry PVC Coated Paper for the purpose of levy of tax under entry 69 of the III Schedule to the Act.

7. The word **"WALL PAPER"** is not defined in the statute but **"PVC Coated paper"** is defined. In such a situation **"WALL PAPER"** shall be understood as decorative material to enhance the beauty of the walls using wall paper waste. It is also used to cover uneven surfaces and minor wall defects to give a better wall surface. Thus even on this count, the Wall Paper fails the test to come within the ambit of "PVC Coated Paper". **The Division Bench of the Hon'ble High Court of Karnataka in the case of Super Market vs. State Of Karnataka ILR 1996 KAR 1969** had an occasion to decide whether "PAPER NAPKINS' falls under "All kinds of Paper" or under "TOILET ARTICLES" and has decided that **paper napkins cannot be classified under "All kinds of Paper" but shall be classified as "toilet articles".** This was the judgment with regard to classification of commodities under the provisions of KST Act, 1957. The contention of the Dealer was that, Paper Napkins shall be classified under entry 125 which stood as follow:

> "SI. No. 125. - All kinds of paper including carbon paper, blotting paper, water proof paper, PVC coated paper, ferro paper, ammonia paper, stencil paper but excluding paper falling under serial number 55, pulp boards, art boards, duplex boards, triple boards, card boards, corrugated boards, and the like, cellophane."

The Court did not favor the contention of the petitioner and held that, it cannot be classified as "all kinds of paper". Thus, the classification of goods with regard to the entry is with reference to grouping of similar kinds of goods which they are used for. As 'Paper Napkin' which is also made up paper cannot be brought under' all kinds of paper', 'Wall Paper' also cannot be either classified as 'Paper of all kinds' or under 'PVC coated paper' and shall be understood and classified as 'wall paper' only.

8. The Division Bench of the Hon'ble High Court of Karnataka in the case of **Raman Boards Ltd vs. State of Karnataka STRP No. 389-435 of 2012 dated 20th August 1984** it is observed as follow:

> In the absence of any inclusion or exclusion of words in the expression 'paper', it must be held that it includes all types of paper. In this background when we look at serial No. 69, 'paper of all kinds 'should include all types of paper. In various judgments, the Courts have held that waste paper, paper waste or new paper are not included in the word 'paper'. The legislature now has consciously included this paper in Serial. No.69. however, after using the words 'paper of all kinds' they have used the words 'including'***. It means. the types of papers set out after the word including was not included in the word 'papers of all kinds'*** This reason appears to be again because of some judgments because of the doubt whether ammonia paper, blotting paper, carbon paper, cellophane, PVC Coated paper, stencil paper tissue paper, water proof paper, art boards, card boards, corrugated boards, duplex boards, pulp boards, straw boards, triplex boards were paper or not. Therefore, learning from the past experience, **the legislature has expressly mentioned that all these papers are included in the word 'paper' and they have also used the word 'and the like'** However they have *expressly*

*excluded the word photographic paper.* Therefore, the ***legislature has clearly expressed what are those papers which are included in the word 'paper'.*** **Therefore,** ***when a particular item falls within the word, description of paper not in doubt, it is the word 'included' in the phrase 'paper of all kinds'.*** If there is any doubt, as to the particular item is paper or not, then in the context of the said paper being understood in common parlance which in undergoes before a final product is reached, we have to see whether the product is included in 'paper'

With the above observations the Hon'ble High Court decided the issue relating to applicability of rate of tax under Karnataka Value Added Tax Act, 2003 and classified Electrical Insulated Press Board as goods not falling under entry 69 of the III Schedule to the Act. It held as follow:

In the instant case, *we have to go not by the popular meaning but trade meaning.* Even though the persons who are in trade, may be aware that the same process is undergone, similar to the one which is used for manufacturing paper, they are clear in their mind that it is not a paper but it is an electrical insulation press board or high 'density board which is used in the electrical transformers as conductor wrapping and insulation barriers between winding coils. In the trade parlance, it is understood as electrical goods. Therefore, that may be the reason why the legislature took the pain to expressly state as to what are the types of paper included in the expression 'paper of all kinds'. <u>*They have excluded this particular type of paper.*</u>*Therefore, the paper of all kinds is a comprehensive and an inclusive definition.* It is not possible to treat the Electrical Insulated Press Board/High Density Board as a paper, so as to fall within the third schedule of the KVAT Act, 2003 - Therefore, the authorities are justified in levying tax under the heading 'all other goods' and the rate of tax at 12.5% We do not see any justification to interfere with the well-considered order of the authorities - Decided in favor of the Revenue and against the assesse.

Thus, the judicial pronouncements, usage of the commodity, in commercial and common parlance clearly points to the fact that, those goods which are not in the nature of stationary or for packing materials shall not be classified as 'Paper of all kinds' and even **if** there is an element of paper in those goods, they cannot be classified as such as held in the case of 'paper napkins', 'Electrical Insulated Press Board/High Density Board' as discussed above. Likewise 'Wall Paper' which does not find place in entry no 69 of III schedule to KVAT Act, 2003 is to be considered as goods falling under section 4(1)(b)(iii) of KVAT Act, 2003 taxable at 14.5% w. e. f. 1.8.2012.

9. Therefore, from the above it establishes that “Wall Paper’ cannot be classified as ‘PVC Coated Paper” or cannot be brought under “Paper of all kinds as found in entry 69 of III Schedule to the Act. Therefore “Wall Paper’ is liable to tax at 14.5% w.e.f. 1.8.2012 as goods falling under section 4(1) (b) (iii) of KVAT Act, 2003.

10. Hence of following clarification is issued.

**<u>CLARIFICATION *NO.CLR.CR.42/2015-16,* DATED 06.10.2015</u>**

It is clarified that, 'Wall Paper' is liable to tax at *14.5%* w. e. f. 1.8.2012 as goods falling under section 4(1) (b) (iii) of KVAT Act, 2003.

**RITVIK PANDEY**
Commissioner of Commercial Taxes
Karnataka, Bengaluru.

**PR. 968**
**SC. 25**

## Office of the Commissioner of Commercial Taxes (Karnataka), Vanijya Therige Karyalaya, Gandhi Nagar, Kalidasa Road, Bengaluru-560009.

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU-CLARIFICATION UNDER SECTION 59(4) OF THE KARNATAKA VALUE ADDED TAX ACT 2003,

Present : **Ritvik Pandey, I.A.S.**
Commissioner of Commercial Taxes.
(Karnataka) Bengaluru.

Sub: KVAT Act, 2003-Clarification under Section 59(4) of the Karnataka Value Added Tax Act, 2003 regarding certain "Ayurvedic Medicines and Products" - Reg**.**

Ref: Application filed on 31-12-2013 by *M/s.* Aar Aar Aloe gold, *No.167/Y,* 3rd Block, 13th Main Road, Near Bhashyam Circle, Rajajinagar, Bengaluru - 560010. (TIN: 29550868781)

In the application cited above, *M/s.* Aar Aar Aloe gold, *No.167/Y* 3rd Block, 13th Main Road, Near Bhashyam Circle, Rajajinagar, Bengaluru - 560010, TIN :29550868781 has sought clarification regarding the rate of tax applicable on certain "Ayurvedic Medicines and Products".

2. Section 59(4) of the Karnataka Value Added Tax Act, 2003 (herein afterwards called 'Act') empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that, the clarification requested by the applicant is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. The matter is examined and it is noticed that the applicant has sought rate of tax on the following products:

1. Aloe muscle Rub
2. Aloe Cold balm
3. Aloe Pain Oil
4. Aloe Healthy hair oil
5. Aloe Foot Care Cream
6. Aloe Multipurpose Gel
7. Aloe Itch Free Cream
8. Kumari Swarasam
9. Aloe Pure
10. Aloe Trim
11. . Aloe Relief
12. Aloe Detox
13. Aloe Lite
14. Aloe Plus

The Drugs Controller, Drugs Control Department, Palace Road, Bengaluru -560001 was requested to clarify whether the commodities for which clarification was sought by the applicant are classified as Drugs or Cosmetics as per the Drugs and Cosmetics Act, 1940. In the letter addressed to the Drugs Controller, the active ingredients of the products and uses as furnished by the applicant were also made known. The details are as follows;

| Sl. No. | Product Name | Active Ingredients | Uses |
|---|---|---|---|
| 1. | Aloe Muscle Rub | Aloe Vera Gel, Camphor, Eucalyptus oil, Methyl Salicylate, Menthol. | Emollient, Counter irritant, Analgesic, treat minor aches and pains, cooling agent |
| 2. | Aloe Cold Balm | Pine, Camphor, Menthol, Eucalyptus, Aloe Vera, Thymol. | Pain Reliever, Counter irritant, Cooling agent, Anti-bacterial & skin healing, Cold reliever |
| 3. | Aloe Pain Oil | Gingelly oil, Aloe Vera, Dinesha Vally, Karpoora, Sunthi, Mustard Sal, Vacha, Methi, Sagru, Devandaru. | Muscle relaxant, Healing agent, Anti-Arthritis, Antil inflammatory, Cramps Relaxant, Analesic, Nervine Tonic, Anti-Aching and Arthritic. |
| 4. | Aloe Healthy hair Oil | Aleo Veral gel, Usira, Mustaka Juice, Jataamaamsi Dry Extract, Banyan Juice, Hisbiscus Juice Amalaki Dry Extract, Bringaraja Juice, Neelini Juice, Prasaarani Juice, Sathi Dry Extract, Curry leaves juice, Brahmi Coconut oil, Vitamin E. | Promote hair growth, Cooling, Stimulates hair pigmentation, Preventing Hair Loss, Prevent Premature Graying, Nourishes Hair Follicles and Shining, Enchance Hair Pigmentation, Promotes Hair growth, Prevents premature falling, thinning of hair, Nourishes Hair Follicles, Boosts the Scalp's circulation, Premature Greying of Hair & nourish the hair roots, controlling hair loss, Carrier, Promotes hair growth. |
| 5. | Aloe Foot Care Cream | Aleo Vera, Honey Natural, Ginger, Neem Manjista, Turmeric Sandal, Tulsi. | Soothe dry and itchy feet, Moisturizer, Anti-Oxidant, Anti-Fungal agent, Skin-Healing agent, Anti-Septic, Smoothener, Anti-Bacterial agent |
| 6. | Aloe Multi-purpose gel | Aloe Vera | Wound healing |

| Sl. No. | Product Name | Active Ingredients | Uses |
|---|---|---|---|
| 7. | Aloe itch free cream | Ghrithkumari, Nimba, Haridra, Yashtimadhu, Chandana, Lasuna Lemon grass, Pudina. | Agent Wound healer, Antiseptic, Anti-inflammatory, Smoothening & skin cooling, Anti-fungal, Relaxant & cooling. |
| 8. | Kumari Swarasam | Aloe Vera gel | Immune Moulator |
| 9. | Aloe pure | Aloe Vera gel | Immune Modulator |
| 10. | Aloe Trim | Alor Vera IH, Syamaparni S.E., Guggulu S.E, Triphala S.E, Garcinia S.E, Natural Honey. | Nutritional supplement, Anti-Oxidant, Reduces Excess Weight, Digestive, Reduces Excess Weight |
| 11. | Aloe Relief | Aloe Vera, Nirgundi,Shallaki, Ashwagandha. | Nutritional supplement, Muscle Relaxant |
| 12. | Aloe Detox | Aloe Vera, Natural Honey IS, Trikatu, Triphala, Dhanyaka, Amalaki, Sunthi. | Nutritional supplement, Anti-Oxidant, Digestive, Appetizer, carminative, Natural Vitamin C supplement |
| 13. | Aloe lite | Aloe Vera, Madhunashini, Yashitmadhu, Guduchi, Bilva, Nimba, Harida. | Immune Modulator, Anti-diabetic, Rejuventor, sweetener, Anti-diabetic, Immune modulator, Antiseptic, blood purifier |
| 14. | Aloe plus | Aloe Vera, Aswagandha S.E, Guduchi S.E, Shilajit S.E. | Immune Modulator |

The Drugs Controller, vide letter dated 9$^{th}$ June 2015 has informed this office that, "Aloe Healthy Hair Oil" is a cosmetic products and all. others are Ayurvedic Drugs. In view of the above, except • Aloe Healthy hair oil' all other goods for which clarification is sought for are goods falling under entry 60 of the III Schedule to KVAT Act, 2003 taxable at 5.5% and 'Aloe Healthy hair oil' being a cosmetic product, attracts tax @ 14.5% as per Section 4(l)(b)(iii) of the KVAT Act, 2003.

4. Hence, the following clarification is issued.

**CLARIFICATION NO.CLRCR.140/2013-14, DATED 06.10.2015**

It is clarified that,

1. Aloe muscle Rub
2. Aloe Cold balm
3. Aloe Pain Oil
4. Aloe Foot Care Cream
5. Aloe Multipurpose Gel
6. Aloe Itch Free Cream
7. Kumari Swarasam
8. Aloe Pure
9. Aloe Trim
10. Aloe Relief
11. Aloe Detox
12. Aloe Lite
13. Aloe Plus

are goods falling under entry 60 of the III Schedule to KVAT Act, 2003 taxable at 5.5% w.e.f. 01-08-2012 and 'Aloe Healthy Hair Oil' being a cosmetic product, attracts tax @ 14.5% as per Section 4(1)(b)(iii) of the KVAT Act, 2003 w.e.f. 01-08-2012.

**RITVIK PANDEY**
Commissioner of Commercial Taxes
Karnataka, Bengaluru.

**PR. 969**
**SC. 25**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಉಪವಿಭಾಗ, ತುಮಕೂರು ರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಸನಿ-32/ಅಧಿಭಾರ ಅರ್ಜಿಸಂ/01/2015-16.**

| | ವಿರುದ್ಧ | ಪ್ರತಿವಾದಿಗಳು |
|---|---|---|
| ಮುಖ್ಯಕಾರ್ಯನಿರ್ವಾಹಣಾಧಿಕಾರಿ<br>ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ,<br>ಬುಗುಡನಹಳ್ಳಿ, ತುಮಕೂರು ತಾಲ್ಲೂಕು. | | ಬಿ.ಟಿ. ಶಿವಕುಮಾರ್ ಮಾಜಿ<br>ಮುಖ್ಯಕಾರ್ಯನಿರ್ವಾಹಣಾಧಿಕಾರಿ,<br>ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ,<br>ಬುಗುಡನಹಳ್ಳಿ, ತುಮಕೂರು ತಾಲ್ಲೂಕು. |

**ಸಹಕಾರ ಸಂಘಗಳ ಕಾಯ್ದೆ 1959 ಕಲಂ 103ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ**

ವಾದಿಯವರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿ ದಾವೆ ದಾಖಲಿಸಿ ಪ್ರತಿವಾದಿಗಳಿಂದ ಹಣ ದುರುಪಯೋಗ ವಸೂಲಾತಿಗಾಗಿ ತೀರ್ಪು ಕೋರಿರುತ್ತಾರೆ. ಈ ಸಂಬಂಧ ಪ್ರಕರಣವನ್ನು ಇತ್ಯರ್ಥಕ್ಕಾಗಿ ತೆಗೆದುಕೊಂಡಿದ್ದು, ಪ್ರತಿವಾದಿಗಳಿಗೆ ದಿನಾಂಕ 4-5-2015 ರಂದು ದಾವಾ ನೋಟಿಸನ್ನು ಕಳುಹಿಸಿ, ದಿನಾಂಕ: 16-5-2015 ರಂದು ವಿಚಾರಣೆಯನ್ನು ನಿಗಧಿಪಡಿಸಿ ಈ ಸಂಬಂಧ ಪ್ರತಿವಾದಿಗಳಾದ ನಿಮಗೆ ಕಳುಹಿಸಿದ ಆರ್.ಪಿ.ಎ.ಡಿ ನೋಟಿಸ್ಸುಗಳನ್ನು ಜಾರಿಯಾಗದೇ ವಾಪಸ್ಸಾಗಿರುತ್ತವೆ. ನಂತರ ಸಂಘದ ಸಿಬ್ಬಂದಿಗಳಿಂದ ಪ್ರತಿವಾದಿಗಳಿಗೆ ಜಾರಿಮಾಡಿಸಿದಾಗಲೂ ಸಹ ಸಿಗದ ಕಾರಣ ಪ್ರತಿವಾದಿ ಮನೆ ಮೇಲೆ ನೋಟಿಸನ್ನು ಅಂಟಿಸುವ ಪ್ರಕ್ರಿಯೆ ಜಾರಿ ಮಾಡಲಾಗಿರುತ್ತದೆ.

ಪ್ರಕರಣದ ವಿಚಾರಣೆಯು ವಿವಿಧ ದಿನಾಂಕಗಳಂದು ಅಂದರೆ ದಿನಾಂಕ 16-5-2015, 25-5-2015, 30-5-2015, 20-6-2015, 27-6-2015, ಮತ್ತು 13-7-2015 ವಿಚಾರಣೆ ನಡೆದಿದ್ದು, ವಿಚಾರಣೆಗೆ ಪ್ರತಿವಾದಿಗಳು ಗೈರು ಹಾಜರಾಗಿರುತ್ತಾರೆ ದಿನಾಂಕ 13-7-2015 ರಂದು ವಾದಿಯು ದಿನಾಂಕ 26-6-2015 ರಂದು ಸಭೆ ನಡೆಸಿ ವಿಷಯ ಸಂಖ್ಯೆ 6 ರಲ್ಲಿ ಸಂಘದಲ್ಲಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಬಿ.ಟಿ. ಶಿವಕುಮಾರ ಬಿನ್ ತಿಮ್ಮೇಗೌಡ ರವರ ಅವಧಿಯಲ್ಲಿ ಸಂಘದ ಹಣ ರೂ. 34,36,013/- ಹಣ ದುರುಪಯೋಗ ಪಡಿಸಿಕೊಂಡಿರುವುದರಿಂದ ಇವರ ನೇಮಕಾತಿ ಕಾಲದಲ್ಲಿ ನೀಡಲಾಗಿದ್ದ ರೂ.15.00 ಲಕ್ಷಗಳ ಭದ್ರತೆ ಹಾಗೂ ಜಾಮೀನುದಾರರ ಆಸ್ತಿಯನ್ನು ಮಾರಾಟ ಮಾಡದಂತೆ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಹೊರಡಿಸಬೇಕಾಗಿ ಅರ್ಜಿ ಸಲ್ಲಿಸಿರುತ್ತಾರೆ.

ವಾದಿ ಸಂಘದವರಿಗೆ ಪ್ರತಿವಾದಿಗಳ ನೇಮಕಾತಿ ಕಾಲದಲ್ಲಿ ನೀಡಲಾಗಿದ್ದ ಸ್ಥಿರಾಸ್ತಿಗಳ ಮಾಹಿತಿಯನ್ನು ನ್ಯಾಯಾಲಯಕ್ಕೆ ಒದಗಿಸಿದ್ದು, ಸದರಿ ಆಸ್ತಿಗಳು ಪ್ರತಿವಾದಿಯಿಂದ ನಡೆದಿದೆ ಎನ್ನಲಾದ ಹಣ ದುರುಪಯೋಗ ಪ್ರಕರಣಕ್ಕೆ ಜಾಮೀನಾಗಿ ತೆಗೆದುಕೊಂಡು ಸದರಿ ಆಸ್ತಿಯನ್ನು ವಿಲೇಮಾಡದಂತೆ ಕ್ರಮ ಕೈಗೊಳ್ಳಲು ಕೋರಿರುವ ಹಿನ್ನಲೆಯಲ್ಲಿ ಹಾಗೂ ಸ್ವತ್ತನ್ನು ವಿಲೇ ಮಾಡಬಹುದಾದ ಸಂದರ್ಭ ಉಂಟಾದಲ್ಲಿ ವಾದಿ ಸಂಘಕ್ಕೆ ನಷ್ಟ ಉಂಟಾಗುವುದನ್ನು ತಪ್ಪಿಸಲು ಆದೇಶ ನೀಡಲು ಕೋರಿರುತ್ತಾರೆ. ವಾದಿ ಸಂಘದವರು ಆದೇಶ ಪೂರ್ವ ಜಪ್ತಿಮಾಡಲು ಕೋರಿ ಅರ್ಜಿ ಸಲ್ಲಿಸಿರುವುದು ಸಮಂಜಸವಾಗಿರುತ್ತದೆ ಎಂದು ಪರಿಗಣಿಸಿದೆ.

ಪ್ರತಿವಾದಿ ಇವರು 2013-14 ನೇ ಅವಧಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಬುಗುಡನಹಳ್ಳಿ ತುಮಕೂರು ತಾಲ್ಲೂಕು ಇದರಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಆಗಿ ಕೆಲಸ ನಿರ್ವಹಿಸಿರುತ್ತಾರೆ. ಸದರಿ ಅವಧಿಯಲ್ಲಿ ರೂ. 34,36,013/- ಹಣದುರುಪಯೋಗ ಮಾಡಿರುವುದು 2013-14 ನೇ ಸಾಲಿನ ಆಡಿಟ್ ವರದಿಯಲ್ಲಿ ಕಂಡುಬಂದಿದ್ದು ಸದರಿ ಹಣದುರುಪಯೋಗದ ಹಣದ ವಸೂಲಾತಿಗಾಗಿ ಸಂಘದ ಕಾರ್ಯದರ್ಶಿಯು ಈ ಕಛೇರಿಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 69 ರ ರೀತ್ಯಾ ದಿ: 4-5-2015 ರಂದು ದಾವಾ ದಾಖಲು ಮಾಡಿರುತ್ತಾರೆ.

ಆದ್ದರಿಂದ ಈ ನ್ಯಾಯಾಲಯವು ವಿಚಾರಣೆಗಾಗಿರುವ ಸಂಖ್ಯೆ:ಸನಿ-32/ಅಧಿಬಾರ ಅರ್ಜಿ ಸಂಖ್ಯೆ/01/2015-16 ರ ಅಂತಿಮ ತೀರ್ಪು ಕಾಯ್ದಿರಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 103 ರನ್ವಯ ಆದೇಶ ಪೂರ್ವ ಜಪ್ತಿ ಮಾಡಿ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂಖ್ಯೆ:ಸನಿ-32/ದಾವಾ/ಕಲಂ 103/01/2015-16** **ದಿನಾಂಕ: 10-08-2015**

ಬಿ.ಕೆ. ಸತ್ಯಕುಮಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು. ಆದ ನಾನು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್ಎಂ/2010, ದಿನಾಂಕ: 17-2-2011ರ ರೀತ್ಯಾ ದತ್ತವಾಗಿರುವ ಕರ್ನಾಟಕ ಸಹಕಾರ ಕಾಯ್ದೆ 1959 ರ ಕಲಂ 103 ರ ಪ್ರಕಾರ ಅಧಿಕಾರವನ್ನು ಚಲಾಯಿಸುತ್ತಾ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಪ್ರತಿವಾದಿ ಮಾಜಿ ಮುಖ್ಯಕಾರ್ಯನಿರ್ವಾಹಣಾಧಿಕಾರಿ ಬಿ.ಟಿ. ಶಿವಕುಮಾರ್ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ. ಬುಗುಡನಹಳ್ಳಿ, ತುಮಕೂರು ತಾ॥ ಇವರ ನೇಮಕಾತಿ ಕಾಲದಲ್ಲಿ ನೀಡಲಾಗಿದ್ದ ಜಾಮೀನುದಾರರ ಆಸ್ತಿಯನ್ನು ಮಾರಾಟ ಮಾಡದಂತೆ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಹೊರಡಿಸಬೇಕಾಗಿ ಅರ್ಜಿ ಸಲ್ಲಿಸಿರುತ್ತಾರೆ.

ಈ ನ್ಯಾಯಾಲಯದಲ್ಲಿ ಇರುವ ದಾವೆಯ ಅಂತಿಮ ಆದೇಶಕ್ಕೆ ಕಾಯ್ದಿರಿಸಿ, ಈ ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ನ್ಯಾಯಾಲಯದ ಮುಂದಿನ ಆದೇಶ ನೀಡುವವರೆಗೂ ಅಥವಾ ಸ್ವತ್ತುಗಳಿಗೆ ತತ್ಸಮಾನ ನಗದು ಭದ್ರತೆ ನೀಡುವವರೆಗೂ ವಿಲೇವಾರಿ ಮಾಡುವುದಾಗಲೀ. ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದಾಗಲೀ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷ್ಯ ಮಾಡಿ ಈ ಸ್ವತ್ತನ್ನು ಕೊಂಡಲ್ಲಿ ಅಥವಾ ಇನ್ಯಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಿಂಧುವಾಗುವುದಿಲ್ಲ (ಸಕ್ರಮವಾಗುವುದಿಲ್ಲ) ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರ ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಸಲ್ಪಟ್ಟ ಮೌಲಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು, ಇವರ ಹೆಸರಲ್ಲಿ ತುಮಕೂರು ಜಿಲ್ಲಾ ಕೇಂದ್ರ ಬ್ಯಾಂಕ್ ನಿಯಮಿತ, ತುಮಕೂರು, ಕೇಂದ್ರ ಕಛೇರಿ, ಈ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ಈ ಆದೇಶ ತಲುಪಿದ 30 ದಿನದೊಳಗಾಗಿ ಅಥವಾ ಅದಕ್ಕಿಂತ ಮುಂಚಿತವಾಗಿ ನ್ಯಾಯಾಲಯಕ್ಕೆ ಹಾಜರು ಪಡಿಸುವುದರ ಮೂಲಕ ಈ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ಪ್ರತಿವಾದಿಗಳು ವಿಫಲರಾದಲ್ಲಿ ಈ ಷರತ್ತು ಪೂರ್ವ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೇ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 10–08–2015 ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಿರುತ್ತೇನೆ.

**ಷೆಡ್ಯೂಲ್ ರೀತ್ಯಾ ಸ್ವತ್ತಿನ ವಿವರ**

| ಕ್ರ.ಸಂ. | ಖಾತೆದಾರರು/ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ಸಂಖ್ಯೆ/ಪಾಲಿಸಿ ಸಂಖ್ಯೆ | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|
| 1. | ಬಿ.ಟಿ. ವೆಂಕಟೇಶ್ ಬಿನ್ ತಿಮ್ಮೆಗೌಡ ಬೆಳ್ಳಾವಿ ಹೋಬಳಿ, ಬುಗುಡನಹಳ್ಳಿ | ಸರ್ವೇ ನಂ. 17/4 | 1–03 ಗುಂಟೆ | ಪೂರ್ವಕ್ಕೆ: ವೆಂಕಟರಾಮಯ್ಯ<br>ಪಶ್ಚಿಮಕ್ಕೆ : ರಸ್ತೆ<br>ಉತ್ತರಕ್ಕೆ: ನಾಜರಾಜುರವರ ಜಮೀನು<br>ದಕ್ಷಿಣಕ್ಕೆ : ವೆಂಕಟರಾಮಯ್ಯನವರ ಜಮೀನು. |
| 2. | ಬಿ.ಎಸ್. ಕೃಷ್ಣಪ್ಪ ಬಿನ್ ಕಾಡಯ್ಯ, ಬೆಳ್ಳಾವಿ ಹೋ॥ ಬುಗುಡನಹಳ್ಳಿ | 1. ಸರ್ವೇ ನಂ. 1/21<br>2. 109/1<br>3. 109/3<br>4. 109/5<br>5. 142/2 | 0.33<br>0.18<br>0.06<br>0.06<br>0.23<br>ಗುಂಟೆ | |

1. **ಪೂರ್ವಕ್ಕೆ** : ರಸ್ತೆ, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ: ಮುನಿಸ್ವಾಮಯ್ಯನವರ ಜಮೀನು ದಕ್ಷಿಣಕ್ಕೆ: ವೆಂಕಟಪ್ಪನವರ ಜಮೀನು.
2. **ಪೂರ್ವಕ್ಕೆ:** ರಾಯಗಾಲುವೆ, ಪಶ್ಚಿಮಕ್ಕೆ: ರಾಯಗಾಲುವೆ, ಉತ್ತರಕ್ಕೆ: ಮುನಿಸ್ವಾಮಯ್ಯನವರ ಜಮೀನು, ದಕ್ಷಿಣಕ್ಕೆ: ಚಿಣ್ಣಪ್ಪ ರವರ ಜಮೀನು.
3. **ಪೂರ್ವಕ್ಕೆ:** ರಾಯಗಾಲುವೆ, ಪಶ್ಚಿಮಕ್ಕೆ: ರಾಯಗಾಲುವೆ, ಉತ್ತರಕ್ಕೆ: ಸ್ವಂತ ಜಮೀನು, ದಕ್ಷಿಣಕ್ಕೆ: ಸ್ವಂತ ಜಮೀನು.
4. **ಪೂರ್ವಕ್ಕೆ:** ರಾಯಗಾಲುವೆ, ಪಶ್ಚಿಮಕ್ಕೆ: ರಾಯಗಾಲುವೆ, ಉತ್ತರಕ್ಕೆ: ಸ್ವಂತ ಜಮೀನು, ದಕ್ಷಿಣಕ್ಕೆ: ಸ್ವಂತ ಜಮೀನು.
5. **ಪೂರ್ವಕ್ಕೆ:** ರಾಯಗಾಲುವೆ, ಪಶ್ಚಿಮಕ್ಕೆ: ರಾಯಗಾಲುವೆ, ಉತ್ತರಕ್ಕೆ: ಸ್ವಂತ ಜಮೀನು, ದಕ್ಷಿಣಕ್ಕೆ: ಮುನಿಸ್ವಾಮಯ್ಯನವರ ಜಮೀನು.

**PR-970**
**SC-15**

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕೇಂದ್ರ ವಲಯ ವೃತ್ತ, ಬೆಂಗಳೂರು ನಗರ ಜಿಲ್ಲೆ ನಂ.32, 2ನೇ ಮಹಡಿ, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಕಟ್ಟಡ, ಡಿ.ದೇವರಾಜ ಅರಸು ರಸ್ತೆ (ರೇಸ್‌ಕೋರ್ಸ್ ರಸ್ತೆ), ಬೆಂಗಳೂರು–01**

**ಸಿಇಪಿ ಸಂಖ್ಯೆ: ಎಆರ್‌ಬಿ–(45)ಸಿಇಪಿ/125/2014–15, ದಿನಾಂಕ: 23–09–2015.**

**ವಿಷಯ :** ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು–560018 ಈ ಬ್ಯಾಂಕಿನ ಅಮಲ್ಜಾರಿ ಸಂಖ್ಯೆ:ಎಆರ್‌ಬಿ–(45)ಸಿಇಪಿ/125/2014–15ಕ್ಕೆ ಸಂಬಂಧಪಟ್ಟಂತೆ ಮಾರಾಟ ಮಾಡಲಾದ ಸಾಲಗಾರರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ :** 1. ದಾವ ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಕೆಎಂಇ/8/486/2012–13 & ಜೆಆರ್‌ಡಿ/ಎಎಕ್ಸ್‌ಬಿ/17/2013–14 ದಿನಾಂಕ:20–03–2014

2. ಅಮಲ್ಜಾರಿ ಸಂಖ್ಯೆ:ಎಆರ್‌ಬಿ–(45)ಸಿಇಪಿ/125/2014–15 ದಿನಾಂಕ: 15–07–2014
3. ಮಾರಾಟಾಧಿಕಾರಿ, ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ಲಿ., ಬೆಂಗಳೂರು ಇವರ ವರದಿ ದಿನಾಂಕ: 31–07–2015
4. ಈ ಕಾರ್ಯಲಯದ ಪತ್ರ ದಿನಾಂಕ: 26–08–2015
5. ಕಾರ್ಯದರ್ಶಿ, ಕ.ರಾ.ಸ. ಅಪೆಕ್ಸ್ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು ರವರ ಪತ್ರ ದಿನಾಂಕ: 08–09–2015

ಮೆ॥ ನಿಖರ ಮೋಟಾರ್ಸ್ ಪ್ರೈ. ಲಿ., ನಂ. 140, ವಿನಾಯಕ ಲೇಔಟ್, ಉಲ್ಲಾಳ ಮುಖ್ಯ ರಸ್ತೆ, ಜ್ಞಾನಭಾರತಿ ಅಂಚೆ. ಬೆಂಗಳೂರು ಇದರ ಪ್ರತಿನಿಧಿ ವ್ಯವಸ್ಥಾಪಕ ನಿರ್ದೇಶಕರು, ಹಾಗೂ ಜಾಮೀನುದಾರರಾದ ವೆಂಕಟರಮಣ ಭಟ್, ವ್ಯವಸ್ಥಾಪಕ ನಿರ್ದೇಶಕರು, ಭಾಗೀರಥಿ ಭಟ್, ನಿರ್ದೇಶಕರು ಇವರು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು ಇವರು 28–12–2010 ರಂದು ನಗದು ಪತ್ತಿನ ಸಾಲವಾಗಿ ರೂ. 1,15,00,000/– ಮತ್ತು ದಿನಾಂಕ: 30–12–2010 ರಂದು ರೂ. 1,85,00,000/– ಒಟ್ಟು ರೂ. 3,00,00,000/– ಗಳನ್ನು ಪಡೆದಿದ್ದು, ಸಾಲದ ಕಂತಿನ ಹಣವನ್ನು ನಿಗದಿತ ಅವಧಿಯೊಳಗೆ ಮರುಪಾವತಿ ಮಾಡದೇ ಸುಸ್ತಿಯಾದ ಕಾರಣ ಬ್ಯಾಂಕಿನ ಶಾಖಾ ವ್ಯವಸ್ಥಾಪಕರು ಸಾಲಗಾರರ ವಿರುದ್ಧ ಕಲಂ 70 ರ ಅಡಿಯಲ್ಲಿ, ದಾವಾ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಕೆಎಂಇ/8/486/2012–13 & ಜೆಆರ್‌ಡಿ/ಎಎಕ್ಸ್‌ಬಿ/17/2013–14 ರಂತೆ, ದಾವೆ ಹೂಡಿ ದಿನಾಂಕ: 20–03–2014 ರಂದು ಅವಾರ್ಡ್ ಪಡೆದು, ಸದರಿ ಅವಾರ್ಡ್ ಆದೇಶದನ್ವಯ ದಿನಾಂಕ: 15–07–2014 ರಂದು ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ–(45)ಇಪಿ/125/2014–15 ದಾಖಲು ಮಾಡಿರುತ್ತಾರೆ. ಬ್ಯಾಂಕಿನ ಮಾರಾಟಾಧಿಕಾರಿಯವರು ಈ ಅಮಲ್ಜಾರಿ ಅರ್ಜಿಯನ್ನು ಕಾರ್ಯಗತಗೊಳಿಸಲು ಫಾರಂ ನಂ.2 ನ್ನು ಜಾರಿ ಮಾಡಿದಾಗ್ಯೂ ಸಹ ಸಾಲಗಾರರು ಬ್ಯಾಂಕಿಗೆ ಸಾಲ ಮರುಪಾವತಿ ಮಾಡಲು ವಿಫಲರಾದ ಕಾರಣ ಸಾಲ ವಸೂಲಾತಿಗಾಗಿ ಅಡಮಾನ ಮಾಡಿದ ಸ್ಥಿರಾಸ್ತಿಯನ್ನು ಜಪ್ತಿ ಮಾಡಲು ಫಾರಂ ನಂ.6ನ್ನು ಜಾರಿ ಮಾಡಲಾಗಿತ್ತು. ಆದರೂ ಸಹ ಸಾಲ ವಸೂಲಿಯಾಗದ ಕಾರಣ ಅಡಮಾನ ಮಾಡಿರುವ ಆಸ್ತಿಯನ್ನು ಹರಾಜಿಗೆ ತರಲು ಫಾರಂ ನಂ.8&9 ರ ಹರಾಜು ನೋಟೀಸನ್ನು ನಿಯಮಾನುಸಾರ ಜಾರಿ ಮಾಡಿ, ಸದರಿ ನೋಟೀಸಿನ ಪ್ರತಿಗಳನ್ನು 30 ದಿನಗಳ ಮುಂಚಿತವಾಗಿ ಉಪನೋಂದಣಾಧಿಕಾರಿರವರ ಕಛೇರಿ, ಬಿ.ಡಿ.ಎ ಕಾಂಪ್ಲೆಕ್ಸ್ ಹತ್ತಿರ ನಾಗರಬಾವಿ, ಬೆಂಗಳೂರು, ಉತ್ತರ ತಾಲ್ಲೂಕು ಕಛೇರಿ, ಕೆಂಗೇರಿ, ಬೆಂಗಳೂರು ಕಛೇರಿಗಳಲ್ಲಿ ಪ್ರಕಟಿಸಲು ಪ್ರತಿಯನ್ನು ನೀಡಿದ್ದು, ಮಾರಾಟ ದಿನಾಂಕವನ್ನು ಪ್ರಚಾರ ಮಾಡಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ: 31–05–2015 ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಿಸಿ, ದಿನಾಂಕ: 08–06–2015 ರಂದು ನಿಗಧಿಪಡಿಸಿದ್ದ ಹರಾಜಿನಲ್ಲಿ 4ಜನ ಬಿಡ್ಡುದಾರರು ಸಕ್ರೀಯವಾಗಿ ಭಾಗವಹಿಸಿದ್ದ, ಅಂತಿಮ ಬಿಡ್ಡುದಾರರಾಗಿ ಶ್ರೀ ಬಸವಯ್ಯ ವೈ.ಸಿ. ರವರು ಕೂಗಿರುವ ಬಿಡ್ಡಿನ ಮೊತ್ತವು ಮೌಲ್ಯಮಾಪಕರು ನಿಗಧಿಪಡಿಸಿರುವ ಮೌಲಕ್ಕೆ ಕಡಿಮೆ ಇದ್ದ ಕಾರಣ ಬಹಿರಂಗ ಹರಾಜನ್ನು ಮುಂದಿನ 7 ದಿವಸಗಳಿಗೆ ಮುಂದೂಡಿರುತ್ತಾರೆ. ಈಗಾಗಲೇ ನಿಗಧಿಪಡಿಸಿರುವ ಹರಾಜನ್ನು ಪುನಃ ದಿನಾಂಕ: 15–06–2015 ರ ಸೋಮವಾರಂದು ಸದರಿ ಬ್ಯಾಂಕಿನ ಪ್ರಧಾನ ಕಛೇರಿಯಲ್ಲಿ ಹರಾಜು ಪ್ರಕ್ರಿಯೆ ಕೈಗೊಂಡಿದ್ದು, ಈ ಹರಾಜಿನಲ್ಲಿ 4ಜನ ಬಿಡ್ಡುದಾರರು ಸಕ್ರೀಯವಾಗಿ ಭಾಗವಹಿಸಿದ್ದರು. ಅಂತಿಮ ಬಿಡ್ಡುದಾರರಾಗಿ ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ಬೆಂಗಳೂರು ರವರು ಹೆಚ್ಚಿನ ಬಿಡ್ಡುದಾರರಾಗಿದ್ದು ರೂ.50.00 ಲಕ್ಷಗಳಿಗೆ ಬಿಡ್ಡು ಮಾಡಿರುತ್ತಾರೆ. ಮಾರುಕಟ್ಟೆ ಬೆಲೆಗೂ ಮತ್ತು ಗೈಡ್‌ಲೈನ್ ವ್ಯಾಲ್ಯೂಗೂ ಹತ್ತಿರವಿರುವುದರಿಂದ ಶ್ರೀಮತಿ ಮಂಗಳಾ ಜಿ ರವರು ಹೆಚ್ಚಿನ ಬಿಡ್ಡದಾರರಾದ ಪ್ರಯುಕ್ತ ಮಾರಾಟಾಧಿಕಾರಿಯವರು ಹರಾಜಿನ ಬಿಡ್ಡನ್ನು ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ರವರ ಹೆಸರಿಗೆ ನಿಲ್ಲಿಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ರವರು ರೂ. 50,00 ಲಕ್ಷಗಳಿಗೆ ಬಿಡ್ ಮಾಡಿದ್ದು, ಇದು ಅತಿ ಹೆಚ್ಚಿನ ಬಿಡ್ಡಾಗಿದ್ದು, ಬಿಡ್ಡುದಾರರು ಹರಾಜು ದಿನವೇ ಬಿಡ್ ಮೊತ್ತದಲ್ಲಿ ಶೇ 15 ರ, ರೂ. 7,50,000/–ಗಳ ಮೊತ್ತವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಾಮನುಸಾರ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುವುದಾಗಿ ತಿಳಿಸಿರುತ್ತಾರೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಾಮವಳಿಗಳ ಪ್ರಕಾರ ಸಾಲಗಾರರು ಅವರ ಸ್ಥಿರಾಸ್ತಿಯನ್ನು ಹರಾಜಾದ 30 ದಿನಗಳ ಒಳಗಾಗಿ ಬ್ಯಾಂಕಿಗೆ ಬರಬೇಕಾದ ಒಟ್ಟು ಮೊತ್ತವನ್ನು ಪಾವತಿಸಿ, ಆಸ್ತಿಯನ್ನು ಸಾಲಗಾರರೇ ಉಳಿಸಿಕೊಳ್ಳುವ ಅವಕಾಶವನ್ನು ನೀಡಿ, ದಿನಾಂಕ: 15–06–2015 ರಂದು ಸಾಲಗಾರರಾದ ಶ್ರೀ ನಿಖರ ಮೋಟರ್ಸ್ ಪ್ರೈ. ಲಿ., ರವರಿಗೆ ಆಸ್ತಿ ಹರಾಜಾದ ಬಗ್ಗೆ ಪತ್ರದ ಮುಖೇನ ತಿಳಿಸಿದ್ದು, ಆದಾಗ್ಯೂ ಸಹ ಸಾಲಗಾರರಿಂದ ಯಾವುದೇ ಪ್ರತಿಕ್ರಿಯೆ, ಆಕ್ಷೇಪಣೆ ಬಂದಿರುವುದಿಲ್ಲ ಹಾಗೂ 30 ದಿನಗಳ ಕಾಲಾವಕಾಶ ಮುಗಿದಿರುವುದರಿಂದ, ಸದರಿ ಆಸ್ತಿಯನ್ನು ಬಿಡ್ಡು ಮಾಡಿ ಯಶಸ್ವಿ ಬಿಡ್ಡುದಾರರಾದ ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ರವರು ಬಿಡ್ಡು ಮಾಡಿದ ಮೊತ್ತದಲ್ಲಿ ಬಾಕಿ ಇದ್ದ ಶೇ 85 ರಷ್ಟು ಮೊತ್ತವನ್ನು ರೂ. 42,50,000/– ಮತ್ತು ಸ್ಟಾಂಪ್ ಶುಲ್ಕ ಹಾಗೂ ನೊಂದಣೆ ಶುಲ್ಕವನ್ನು ರೂ. 3,30,500/– ಲಕ್ಷಗಳನ್ನು ದಿನಾಂಕ: 29–07–2015 ರಂದು ಪಾವತಿಸಿದ್ದು, ದಿನಾಂಕ: 15–06–2015 ರಂದು ನಡೆಸಿದ ಸ್ಥಿರಾಸ್ತಿಯ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳನ್ವಯ ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ನಂ. 29, 1ನೇ ಕ್ರಾಸ್, 1ನೇ ಮುಖ್ಯರಸ್ತೆ, ವಿವೇಕನಂದ ನಗರ, ಬಿ.ಎಸ್.ಕೆ. 3ನೇ ಹಂತ, ಬೆಂಗಳೂರು–85 ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಸ್ಥಿರೀಕರಣ ಮಾಡಿಕೊಡಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ವರದಿ ಸಲ್ಲಿಸಿರುತ್ತಾರೆ.

ಈ ಕಾರ್ಯಾಲಯದ ಉಲ್ಲೇಖ (4) ರ ಪತ್ರದಲ್ಲಿ ಕೋರಿದ ಹೆಚ್ಚಿನ ಮಾಹಿತಿಯನ್ನು ಉಲ್ಲೇಖ (5) ರಲ್ಲಿ ಬ್ಯಾಂಕಿನ ಕಾರ್ಯದರ್ಶಿರವರು ನೀಡಿರುತ್ತಾರೆ. ಈ ಸ್ಥಿರಾಸ್ತಿಗೆ ಸಂಬಂಧಪಟ್ಟಂತೆ ಯಾವುದೇ ನ್ಯಾಯಾಲಯದಿಂದ ತಡೆಯಾಜ್ಞೆ, ಮಧ್ಯಂತರ ಆದೇಶ ತಕರಾರುಗಳು ಬ್ಯಾಂಕಿಗೆ ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ನೋಂದಣಿ ಶುಲ್ಕಕ್ಕೆ ಸಂಬಂಧಿಸಿದ ಪಿ.ಓ. ನಕಲು ಪ್ರತಿಗಳನ್ನು ಲಗತ್ತಿಸಿ, ಅಂಶಗಳನ್ನು ಪರಿಶೀಲಿಸಿ ಸದರಿ ಸ್ವತ್ತಿನ ಮಾರಾಟ ಸ್ಥಿರೀಕರಣವನ್ನು ಮಾಡಬೇಕೆಂದು ಕೋರಿರುತ್ತಾರೆ.

ದಿನಾಂಕ: 15–06–2015 ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿಯ ಬಹಿರಂಗ ಹರಾಜಿನ ನಡವಳಿಕೆಯನ್ನು ಹಾಗೂ ತದನಂತರ ದಾಖಲಾತಿಗಳನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 4 ಜನ ಬಿಡ್ ದಾರರು ಭಾಗವಹಿಸಿದ್ದು ಆ ಪೈಕಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ನಂ.29, 1ನೇ ಕ್ರಾಸ್, 1ನೇ ಮುಖ್ಯರಸ್ತೆ, ವಿವೇಕನಂದ ನಗರ, ಬಿ.ಎಸ್.ಕೆ. 3ನೇ ಹಂತ, ಬೆಂಗಳೂರು–85 ಇವರಿಗೆ ರೂ. 50,00,000/– (ರೂಪಾಯಿಗಳು ಐವತ್ತು ಲಕ್ಷ ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 45 ದಿನಗಳೊಳಗಾಗಿ ಬಿಡ್ ಮಾಡಿದ ಪೂರ್ಣ ಸಂದಾಯ ಮಾಡಿದ್ದು ಈ ಪೈಕಿ ಬಾಕಿದಾರರು ವಾದಿ ಬ್ಯಾಂಕಿಗೆ ಪಾವತಿಸಬೇಕಾಗಿದ್ದ ಬಾಕಿ ಸಾಲವು ಪೂರ್ಣ ಮರು ಪಾವತಿಯಾಗಿರುವುದರಿಂದ ಮತ್ತು ಈ ಬಗ್ಗೆ ಈ ಕಛೇರಿಗೆ ಯಾವುದೇ ಆಕ್ಷೇಪಣೆಗಳು ಬಾರದೇ ಇರುವುದರಿಂದ ದಿನಾಂಕ: 15–06–2015 ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಹರಾಜನ್ನು ಸ್ಥಿರೀಕರಣಗೊಳಿಸಬಹುದೆಂದು ಉಲ್ಲೇಖ (3) ಮತ್ತು (5) ರಂತೆ ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿ ರವರು ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆಯೆಂದು ಕಂಡು ಬಂದಿರುವುದರಿಂದ ಈ ಹರಾಜನ್ನು ಸ್ಥಿರೀಕರಣಗೊಳಿಸುವುದು ನ್ಯಾಯಸಮ್ಮತವೆಂದು ಮನಗೊಂಡು ಈ ಕೆಳಗಿನಂತೆ ಮಾರಾಟ ಸ್ಥಿರೀಕರಣ ಆದೇಶವನ್ನು ಹೊರಡಿಸಲಾಗಿದೆ.

## ಆದೇಶ

ದೊಡ್ಡತಮ್ಮೇಗೌಡ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕೇಂದ್ರ ವಲಯ ವೃತ್ತ, ನಂ.32, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಕಟ್ಟಡ, 2ನೇ ಮಹಡಿ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು–01 ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/139/ಸಿಎಲ್ಎಂ/2010 ದಿನಾಂಕ:17–02–2011 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ–(45)ಸಿಇಪಿ/125/2014–15 ರಲ್ಲಿನ ಸಾಲದ ಬಾಕಿ ವಸೂಲಾತಿಗಾಗಿ ಇಲ್ಲಿ ಮೆ: ನಿಖರ ಮೋಟಾರ್ಸ್ ಪ್ರೈ, ಲಿ., ಬೆಂಗಳೂರು ರವರಿಗೆ ಸೇರಿದ ಈ ಆದೇಶದ ಷೆಡ್ಯೂಲ್‌ನಲ್ಲಿ ತಿಳಿಸಿರುವ ಸ್ಥಿರಾಸ್ತಿಯನ್ನು ದಿನಾಂಕ: 15–06–2015 ರಂದು ವಾದಿ ಬ್ಯಾಂಕ್ ಮಾರಾಟಾಧಿಕಾರಿಯವರು ನಡೆಸಿರುವ ಬಹಿರಂಗ ಹರಾಜಿನಲ್ಲಿ ಶ್ರೀಮತಿ ಮಂಗಳಾ ಜಿ ಕೋಂ. ಮಹದೇವಯ್ಯ ನಂ. 29, 1ನೇ ಕ್ರಾಸ್, 1ನೇ ಮುಖ್ಯರಸ್ತೆ, ವಿವೇಕನಂದ ನಗರ, ಬಿ.ಎಸ್.ಕೆ. 3ನೇ ಹಂತ, ಬೆಂಗಳೂರು–85 ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿ ಖರೀದಿಸಿದ್ದು ಇವರಿಗೆ ರೂ. 50,00,000/– (ರೂಪಾಯಿಗಳು ಐವತ್ತು ಲಕ್ಷ ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿದ್ದೇನೆ.

## ಸ್ಥಿರಾಸ್ತಿಯ ವಿವರ

ಮೆ: ನಿಖರ ಮೋಟಾರ್ಸ್ ಪ್ರೈ ಲಿ., ಇದರ ಸ್ಥಿರಾಸ್ತಿ ಸ್ವತ್ತಿನ ಸಂಖ್ಯೆ: 179, ಖಾತಾ ನಂ. 134, ಉಲ್ಲಾಳ ವಿಲೇಜ್, ಯಶವಂತಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಪೂರ್ವ ಪಶ್ಚಿಮ 42 1/2 ಅಡಿಗಳು, ಉತ್ತರ ದಕ್ಷಿಣ 27 1/2

**ಚೆಕ್ಕು ಬಂದಿ**

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಖಾಸಗಿ ಸ್ವತ್ತು
ಉತ್ತರಕ್ಕೆ : ಸ್ವತ್ತಿನ ಸಂಖ್ಯೆ: 180
ದಕ್ಷಿಣಕ್ಕೆ : ಸ್ವತ್ತಿನ ಸಂಖ್ಯೆ: 179/ಬಿ

ಮಾರಾಟವಾದ ಮೊಬಲಗು ರೂ. 50,00,000/– ಗಳು

ಮಾರಾಟ ಮಾಡಿದ ದಿನಾಂಕ : 15–06–2015

ಮಾರಾಟದ ಹರಾಜು ಸ್ಥಿರೀಕರಣ ದಿನಾಂಕ: 23–09–2015

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 23–09–2015 ರಂದು ನೀಡಲಾಗಿದೆ.

PR-962
SC-10

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಹಾಗೂ ವಸೂಲಾಧಿಕಾರಿಗಳು ಕೇಂದ್ರವಲಯ ವೃತ್ತ
ರೇಸ್ ಕೋರ್ಸ್ ರಸ್ತೆ, ಬೆಂಗಳೂರು ನಗರ ಜಿಲ್ಲೆ

## ಕರ್ನಾಟಕ ರಾಜ್ಯ ಚುನಾವಣಾ ಆಯೋಗ

**ವಿಷಯ** : ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ – 2013 ರಲ್ಲಿ **ಯಾದಗಿರಿ ಜಿಲ್ಲೆಯ ಗುರುಮಠಕಲ್ ಪಟ್ಟಣಪಂಚಾಯತಿ,** ಯಲ್ಲಿ ಸ್ಪರ್ಧಿಸಿದ ಅಭ್ಯರ್ಥಿಗಳು ಚುನಾವಣಾ ವೆಚ್ಚ ವಿವರವನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ, 1964 ರ ಪ್ರಕರಣ 16ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ** :
1) ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ, 1964 ರ ಪ್ರಕರಣ 16ಬಿ ಮತ್ತು 16ಸಿ ಹಾಗೂ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರುಗಳ ಚುನಾವಣೆ) ಸೇರ್ಪಡೆ ನಿಯಮಗಳು 2010 ರ ನಿಯಮ, 22 ಸಿ.
2) ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, **ಯಾದಗಿರಿ** ಜಿಲ್ಲೆ ಇವರ ವರದಿ ಸಂಖ್ಯೆ: **ಕಂ/ಚುನಾವಣೆ/ನ ಸ /03/13–14/10554** ದಿನಾಂಕ **06–12–2013**
3) ಆಯೋಗದ ನೋಟಿಸು ಸಂಖ್ಯೆ **ರಾಚುಆ:198 ಇಯುಬಿ:2013, ದಿ:23–01–2014**.

**<u>ಪ್ರಸ್ತಾವನೆ:</u>**

2013ರಲ್ಲಿ ನಡೆದ ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆಯಲ್ಲಿ **ಯಾದಗಿರಿ ಜಿಲ್ಲೆಯ ಗುರುಮಠಕಲ್ ಪಟ್ಟಣಪಂಚಾಯತಿ** ಗಳಲ್ಲಿ ಸ್ಪರ್ಧಿಸಿದ ಅಭ್ಯರ್ಥಿಗಳು ಚುನಾವಣಾ ವೆಚ್ಚ ವಿವರವನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ, 1964 ರ ಪ್ರಕರಣ 16ಬಿ ಮತ್ತು 16ಸಿಯಲ್ಲಿ ಉಪಬಂಧಿಸಿರುವಂತೆ ಹಾಗೂ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ಸೇರ್ಪಡೆ ನಿಯಮಗಳು, 2010 ರ ನಿಯಮ 22ಸಿ ರನ್ವಯ ಮತಗಳ ಎಣಿಕೆ ನಡೆದು ಫಲಿತಾಂಶ ಘೋಷಣೆಯಾದ 30 ದಿನಗಳ ಒಳಗೆ ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ಉಲ್ಲೇಖ(2)ರಂತೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, **ಯಾದಗಿರಿ** ಜಿಲ್ಲೆ ರವರು ವರದಿ ಸಲ್ಲಿಸಿರುತ್ತಾರೆ.

ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ, 1964 ರ ಪ್ರಕರಣ 16ಸಿ ಹಾಗೂ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ಸೇರ್ಪಡೆ ನಿಯಮಗಳು, 2010 ರ ನಿಯಮ 22ಸಿ(5) ರನ್ವಯ ಆಯೋಗದಿಂದ ಉಲ್ಲೇಖ(3) ರ ದಿನಾಂಕ: **23–01–2014** ರಂತೆ ನೋಟೀಸನ್ನು ನೀಡಿ ಏಕೆ ಅನರ್ಹಗೊಳಿಸಬಾರದು ಎಂಬ ಬಗ್ಗೆ ಸಮಜಾಯಿಷಿ ನೀಡಲು ತಿಳಿಯಪಡಿಸಲಾಗಿತ್ತು. ಆದಾಗ್ಯೂ ಸಮಜಾಯಿಷಿಯನ್ನು ಹಾಗೂ ಚುನಾವಣಾ ವೆಚ್ಚದ ವಿವರಗಳನ್ನು ಸಲ್ಲಿಸಿರುವುದಿಲ್ಲ. ಆಯೋಗದ ನೋಟಿಸನ್ನು ಅಭ್ಯರ್ಥಿಗಳಿಗೆ ಜಾರಿಮಾಡಿರುವ ಬಗ್ಗೆ ಜಿಲ್ಲಾಧಿಕಾರಿಗಳು **ಯಾದಗಿರಿ** ಜಿಲ್ಲೆ ರವರು ದಿ:**29–11–2014** ರಂದು ವರದಿ ಮಾಡಿರುತ್ತಾರೆ.

**ಅನುಬಂಧ–ಅ** ರಲ್ಲಿ ನಮೂದಾಗಿರುವ ಅಭ್ಯರ್ಥಿಗಳು ಆಯೋಗದ ನೋಟಿಸು ಜಾರಿಯಾಗಿದ್ದರೂ ಚುನಾವಣಾ ವೆಚ್ಚವಿವರಗಳನ್ನು ಸಲ್ಲಿಸಲು ವಿಫಲರಾದ ಬಗ್ಗೆ ಯಾವುದೇ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

ಈ ಹಿನ್ನಲೆಯಲ್ಲಿ ಲಗತ್ತಿಸಿರುವ **ಅನುಬಂಧ–ಅ** ರಲ್ಲಿ ನಮೂದಿಸಿರುವ **17** ಅಭ್ಯರ್ಥಿಗಳು ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸಲು ವಿಫಲರಾಗಿರುವುದರಿಂದ ಹಾಗೂ ಯಾವುದೇ ಸಮಜಾಯಿಷಿಯನ್ನು ನೀಡದಿರುವುದರಿಂದ ಈ ಕೆಳಕಂಡಂತೆ ಆದೇಶ,

**<u>ಆದೇಶ ಸಂಖ್ಯೆ: ರಾಚುಆ 198 ಇಯುಬಿ 2013, ಬೆಂಗಳೂರು, ದಿನಾಂಕ: 31–12–2014.</u>**

ಮೇಲೆ ವಿವರಿಸಿರುವಂತೆ ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ – 2013ರ **ಯಾದಗಿರಿ** ಜಿಲ್ಲೆಯ **ಗುರುಮಠಕಲ್ ಪಟ್ಟಣಪಂಚಾಯತಿ ಯಿಂದ** ಸ್ಪರ್ಧಿಸಿದ **17** ಅಭ್ಯರ್ಥಿಗಳು ಆಯೋಗದಿಂದ ನೀಡಿದ ನೋಟಿಸಿಗೆ ಸಮಜಾಯಿಷಿ ಹಾಗೂ ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸಿಲ್ಲವೆಂದು ದೃಢಪಟ್ಟಿರುವುದರಿಂದ, ರಾಜ್ಯ ಚುನಾವಣಾ ಆಯೋಗವು **ಅನುಬಂಧ–ಅ** ರಲ್ಲಿ ನಮೂದಿಸಿರುವ ಅಭ್ಯರ್ಥಿಗಳನ್ನು ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ, 1964ರ ಪ್ರಕರಣ 16ಸಿ ಅನುಸಾರ ಈ ಆದೇಶದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

ಆಯುಕ್ತರು
ರಾಜ್ಯ ಚುನಾವಣಾ ಆಯೋಗ

ಅನುಬಂಧ – ಅ

ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ–2013ರಲ್ಲಿ ಸ್ಪರ್ಧಿಸಿ, ಚುನಾವಣಾ ವೆಚ್ಚ ವಿವರಗಳನ್ನು ಸಲ್ಲಿಸದೇ ಇರುವುದರಿಂದ, ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ 1964ರ ಕಲಂ 16ಸಿ ರಡಿ ಅನರ್ಹಗೊಳಿಸಿರುವ ಅಭ್ಯರ್ಥಿಗಳ ವಿವರ

ಜಿಲ್ಲೆಯ ಹೆಸರು: ಯಾದಗಿರಿ

ನಗರ ಸ್ಥಳೀಯ ಸಂಸ್ಥೆ ಹೆಸರು:: ಗುರುಮಠಕಲ್ ಪಟ್ಟಣ ಪಂಚಾಯತಿ

| ಕ್ರ. ಸಂ. | ಅಭ್ಯರ್ಥಿ ಹೆಸರು ಮತ್ತು ವಿಳಾಸ | ವಾರ್ಡ್ ನಂ. | ಜಿಲ್ಲಾಧಿಕಾರಿಗಳ ವರದಿಯ ದಿನಾಂಕ | ಅಭ್ಯರ್ಥಿಗೆ ಆಯೋಗದ ನೋಟಿಸ್ ಜಾರಿಯಾಗಿರುವ ದಿನಾಂಕ | ನೋಟಿಸ್ ಜಾರಿಯಾದ ನಂತರ ಜಿಲ್ಲಾಧಿಕಾರಿಗಳ ವರದಿಯ ದಿನಾಂಕ | ಆಯೋಗದ ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಅಷ್ಫಾಕ ಅಹ್ಮದ್,<br>ಪಂಚಾಯತಿ ಮೊಹಲ್ಲಾ ಗುರುಮಠಕಲ್ ತಾ॥ಜಿ॥ ಯಾದಗಿರಿ | 7 | 6/12/2013 | 30/1/2014 | 29/11/2014 | ಆಯೋಗದಿಂದ ನೀಡಿದ ನೋಟೀಸಿಗೆ ಸಮಜಾಯಿಷಿ ಹಾಗೂ ಚುನಾವಣಾ ವೆಚ್ಚವಿವರಗಳನ್ನು ಸಲ್ಲಿಸದಿರುವುದರಿಂದ ಅನರ್ಹಗೊಳಿಸಲಾಗಿದೆ. |
| 2 | ಮೊಹ್ಮದ ಉಮರ,<br>ಪಂಚಾಯತಿ ಮೊಹಲ್ಲಾ ಗುರುಮಠಕಲ್ ತಾ॥ಜಿ॥ ಯಾದಗಿರಿ | 7 | 6/12/2013 | 30/1/2014 | 29/11/2014 | |
| 3 | ಫಯಾಜ್ ಅಹ್ಮದ್,<br>ಪಂಚಾಯತಿ ಮೊಹಲ್ಲಾ ಗುರುಮಠಕಲ್ ತಾ॥ಜಿ॥ ಯಾದಗಿರಿ | 8 | 6/12/2013 | 30/1/2014 | 29/11/2014 | |
| 4 | ಮೊಹ್ಮದ್ ಅಲಿ,<br>ಕೆ.ಹೆಚ್.ಡಿ.ಸಿ ಗುರುಮಠಕಲ್ ತಾ॥ಜಿ॥ ಯಾದಗಿರಿ | 8 | 6/12/2013 | 30/1/2014 | 29/11/2014 | |
| 5 | ಸೈಯದ ಅಕ್ಬರ್,<br>ಗುರುಮಠಕಲ್ ತಾ॥ಜಿ॥ ಯಾದಗಿರಿ | 8 | 6/12/2013 | 30/1/2014 | 29/11/2014 | |
| 6 | ಬಾಬು,<br>ಹರಿಜನವಾಡ ಗುರುಮಠಕಲ್ ತಾ॥ಜಿ॥ ಯಾದಗಿರಿ | 10 | 6/12/2013 | 30/1/2014 | 29/11/2014 | |
| 7 | ಮಾಣಿಕಪ್ಪ,<br>ಹರಿಜನವಾಡ ಗುರುಮಠಕಲ್ ತಾ॥ಜಿ॥ ಯಾದಗಿರಿ | 10 | 6/12/2013 | 31/1/2014 | 29/11/2014 | |

